## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1148 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮುನಿರಾಜುಗೌಡ ಪಿ.ಎಂ.<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 23-12-2021 |
| ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದ ಬಿನ್ನಿಮಿಲ್ ಸಮೀಪದ ಪೋಲೀಸ್ ವಸತಿ ಸಮುಚ್ಛಯವನ್ನು ಕೇವಲ 2-3 ವರ್ಷಗಳ ಹಿಂದೆ ನಿರ್ಮಾಣವಾಗಿದ್ದು, ಅಲ್ಲಿ ವಾಸ ಮಾಡುತ್ತಿದ್ದ ಪೋಲೀಸ್ ಸಿಬ್ಬಂದಿಗಳ ಒಂದು ಬಹುಮಹಡಿ ಕಟ್ಟಡವು ವಾಲಿಕೊಂಡಿದ್ದರಿಂದ ಅದರಲ್ಲಿರುವ ಕುಟುಂಬಗಳನ್ನು ಸ್ಥಳಾಂತರಿಸಿ ಕಟ್ಟಡವನ್ನು ಖಾಲಿ ಮಾಡಿಸಲಾಗಿರುತ್ತದೆಯೇ; | ಬೆಂಗಳೂರು ನಗರದ ಟ್ಯಾಂಕ್ ಬಂಡ್ ರಸ್ತೆಯಲ್ಲಿರುವ ಬಿನ್ನಿಮಿಲ್ ಪೋಲೀಸ್ ವಸತಿಗೃಹ ಸಮುಚ್ಛಯದ 'ಬಿ' ಬ್ಲಾಕ್ ಕಟ್ಟಡವು ಇತ್ತೀಚೆಗೆ ವಾಲಿಕೊಂಡಿರುವುದರಿಂದ ತಾಂತ್ರಿಕ ಸಲಹೆಗಾರರ ಸಲಹೆಯಂತೆ ಸದರಿ ಕಟ್ಟಡದಲ್ಲಿ ವಾಸವಿದ್ದ 32 ಕುಟುಂಬಗಳನ್ನು ಸುರಕ್ಷತೆಯ ದೃಷ್ಟಿಯಿಂದ ಹಾಗೂ ಕಟ್ಟಡದ ಪುನರೋತ್ಥಾನದ ಕಾರ್ಯಗಳಿಗಾಗಿ ಖಾಲಿ ಮಾಡಿಸಲಾಗಿರುತ್ತದೆ. ಈ ಪ್ರಕರಣವನ್ನು ಸರ್ಕಾರವು ಅತ್ಯಂತ ಗಂಭೀರವಾಗಿ ಪರಿಗಣಿಸಿದ್ದು, ಸದರಿ ವಸತಿಗೃಹ ಸಮುಚ್ಛಯಗಳಿಗೆ ಖುದ್ದು ಭೇಟಿ ನೀಡಿ ಪರಿಶೀಲಿಸಿರುತ್ತೇನೆ. ಸದರಿ ಕಟ್ಟಡವು ನಿರ್ಮಾಣಗೊಂಡು ಮೂರು ವರ್ಷದ ಅವಧಿಯೊಳಗೆ ವಾಲಲು ಕಾರಣವಾದ ತಾಂತ್ರಿಕ ವೈಫಲ್ಯಗಳ ಬಗ್ಗೆ ಹಾಗೂ ಇದಕ್ಕೆ ಕಾರಣಕರ್ತರಾದವರ ಬಗ್ಗೆ ವಿವರವಾದ ವರದಿಯನ್ನು ಸಲ್ಲಿಸುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೋಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರಿಗೆ ಸೂಚಿಸಲಾಗಿರುತ್ತದೆ. ವರದಿ ಸ್ವೀಕೃತವಾದ ತಕ್ಷಣ ಸದರಿ ಕಟ್ಟಡವನ್ನು ಪುನರೋತ್ಥಾನ ಮಾಡುವ ಬಗ್ಗೆ ಹಾಗೂ ಇದಕ್ಕೆ ಕಾರಣಕರ್ತರಾದವರ ವಿರುದ್ಧ ನಿರ್ದಾಕ್ಷಿಣ್ಯವಾಗಿ ಕ್ರಮ ವಹಿಸಲಾಗುವುದು. ಸದರಿ ಕಟ್ಟಡದ ಪುನರೋತ್ಥಾನ ಕಾರ್ಯವನ್ನು ಶೀಘ್ರವಾಗಿ ಪೂರ್ಣಗೊಳಿಸುವಂತೆ ಈಗಾಗಲೇ ನಿರ್ದೇಶಕರು, ಕರ್ನಾಟಕ ರಾಜ್ಯ ಪೋಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರಿಗೆ ಕಟ್ಟು ನಿಟ್ಟಿನ ಸೂಚನೆ ನೀಡಲಾಗಿರುತ್ತದೆ. |
| ಆ) | ಈ ಕಟ್ಟಡದಲ್ಲಿ ಒಟ್ಟು ಎಷ್ಟು ಮಹಡಿಗಳಿವೆ; ಎಷ್ಟು ವಸತಿ ಘಟಕಗಳಿವೆ; ಈ ಕಟ್ಟಡದ ನಿರ್ಮಾಣ ಕಾರ್ಯ ಯಾವಾಗ ಪ್ರಾರಂಭವಾಗಿ ಯಾವಾಗ ಮುಕ್ತಾಯವಾಗಿರುತ್ತದೆ; | |
| ಇ) | ಈ ಕಟ್ಟಡ ನಿರ್ಮಾಣಕ್ಕಾಗಿ ಆಗಿರುವ ವೆಚ್ಚ ಎಷ್ಟು; ಕಟ್ಟಡವನ್ನು ನಿರ್ಮಾಣ ಮಾಡಿರುವ ಗುತ್ತಿಗೆದಾರರು ಯಾರು; | |
| ಈ) | ಕಟ್ಟಡ ನಿರ್ಮಾಣವಾದ ಕೆಲವು ವರ್ಷಗಳಲ್ಲಿ ಸದರಿ ಕಟ್ಟಡ ವಾಲಿಕೊಂಡಿರುವುದರ ಬಗ್ಗೆ ಸರ್ಕಾರದಿಂದ ಪರಿಶೀಲನೆ ನಡೆಸಲಾಗಿದೆಯೇ; ಪರಿಶೀಲನೆ ನಡೆಸಲಾಗಿದ್ದಲ್ಲಿ, ಅದರನ್ವಯ ಸರ್ಕಾರದಿಂದ ಕೈಗೊಂಡಿರುವ ಕ್ರಮಗಳೇನು; ವಿವರ ನೀಡುವುದು. | |
| ಉ) | ಸದರಿ ಕಟ್ಟಡದ ನಿರ್ಮಾಣ ಕಾಮಗಾರಿ ಸಂದರ್ಭದಲ್ಲಿ ಬಹುಮಹಡಿ ಕಟ್ಟಡ ನಿರ್ಮಾಣಕ್ಕಾಗಿ ಅನುಸರಿಸಬೇಕಾದ ತಾಂತ್ರಿಕ ವಿಧಿವಿಧಾನಗಳನ್ನು ಪೂರ್ಣ ಪ್ರಮಾಣದಲ್ಲಿ ಅನುಸರಿಸಲಾಗಿರುವ ಬಗ್ಗೆ ಮತ್ತು ನಿಗದಿತ ಗುಣಮಟ್ಟದೊಂದಿಗೆ ಕಟ್ಟಡ ನಿರ್ಮಾಣ ಕಾಮಗಾರಿ ನಡೆದಿರುವ ಬಗ್ಗೆ ಸರ್ಕಾರದಿಂದ ಖಾತರಿಪಡಿಸಿಕೊಳ್ಳಲಾಗಿದೆಯೇ? | |

ಸಂಖ್ಯೆ:ಹೆಚ್‌ಡಿ 107 ಪಿಬಿಎಲ್ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು